ಶ್ರೀನಿವಾಸ ವೆಂ. ಪಾಡಿಗಾರ*

# ದೇವರ ಶೀಗಿಹಳ್ಳಿಯ ವಿಶಿಷ್ಟ ಸೂರ್ಯವಿಗ್ರಹ

ಬೆಳಗಾಂವ ಜಿಲ್ಲೆಯ ಬೈಲಹೊಂಗಲ ತಾಲೂಕಿನ ದೇವರಶೀಗಿಹಳ್ಳಿಯಲ್ಲಿ ಕಲ್ಯಾಣದ ಚಾಲುಕ್ಯರ ಕಾಲಕ್ಕನ್ವಯಿಸುವ ಜೀರ್ಣಾವಸ್ಥೆಯಲ್ಲಿರುವ ತ್ರಿಕೂಟ (ತ್ರೈಪುರುಷ–ಶಿವ, ವಿಷ್ಣು, ಸೂರ್ಯ) ದೇವಾಲಯವಿದೆ.[1] ಇದರ ಒಂದು ಗರ್ಭಗುಡಿಯಲ್ಲಿ ಸೂರ್ಯನ ವಿಗ್ರಹವಿದ್ದು, ೧೩೫ ಸೆಂ. ಮಿ· ಎತ್ತರದಾಗಿದ್ದು ಸುಮಾರು ೧೧ನೇ ಶತಮಾನದ ಶಿಲ್ಪಶೈಲಿಗೆ ಸೇರುತ್ತದೆ.

ಈ ಶಿಲ್ಪದಲ್ಲಿ ಕಿರೀಟ, ಹಾರ, ಕೇಯೂರ, ಕಟಕಾದಿ ಹಲವು ಆಭರಣಗಳಿಂದ ಅಲಂಕೃತವಾಗಿರುವ ಸೂರ್ಯವಿಗ್ರಹವು ಸಮಸ್ಥಾನಕ ಭಂಗಿಯಲ್ಲಿ ನಿಂತಿದ್ದು, ಕೈಕಾಲುಗಳ ಪ್ರತಿಯೊಂದು ಬೆರಳಿಗೂ ಉಂಗುರಗಳಿವೆ. ಎರಡೂ ಕೈಗಳಲ್ಲಿ ಭುಜದೆತ್ತರಕ್ಕೆ ನಿಂತಿರುವ ಪದ್ಮಗಳಿವೆ. ಶಿರಸ್ಸಿನ ಹಿಂದೆ ಪ್ರಭಾಮಂಡಲ, ಪಾದಪೀಠದ ಮುಮ್ಮುಖದಲ್ಲಿ ಏಳು ಕುದುರೆಗಳಿವೆ. ಪ್ರಭಾವಳಿಯ ಸ್ತಂಭಿಕೆಗಳ ಮೇಲೆ ಒಂದೇ ಕಮಾನಿನ ಮಕರ ತೋರಣ ಕೀರ್ತಿಮುಖದಲ್ಲಿ ಪರ್ಯವಸಾನ ಹೊಂದಿದೆ. ಮಕರಗಳಿಗೆ ಅಡ್ಡವಾಗಿ ಸೂರ್ಯನ ಇಕ್ಕೆಲಗಳಲ್ಲಿ ಒಂದೊಂದು ಚಿಕಣಿ ಗುಡಿಯ ಮಾದರಿ ಇದೆ. ಈ ಚಿಕಣಿಗುಡಿಗಳಲ್ಲಿ ಸೂರ್ಯ ಬಿಂಬದ ಬಲಕ್ಕೆ ಅಕ್ಷಮಾಲೆ, ಅಂಕುಶ, ಸ್ರುಕ್ ಕಮಂಡಲು ಹಿಡಿದು ಕುಳಿತಿರುವ ಚತುರ್ಮುಖ ಬ್ರಹ್ಮ ಮತ್ತು ಎಡಕ್ಕೆ ಅಕ್ಷಮಾಲೆ ಪದ್ಮ, ಶಂಖ ಹಾಗೂ ಫಲ ಹಿಡಿದು ಕುಳಿತಿರುವ ವಿಷ್ಣು ಚಿತ್ರಿಸಲ್ಪಟ್ಟಿದ್ದಾರೆ. (ಇವರಿಬ್ಬರೂ ಕ್ರಮವಾಗಿ ಮೊದಲ ಮತ್ತು ಕೊನೆಯ ಆದಿತ್ಯರೆನಿಸಿದ ಧಾತೃ ಮತ್ತು ವಿಷ್ಣುವನ್ನು ಪ್ರತಿನಿಧಿಸುತ್ತಿದ್ದರೂ ಇರಬಹುದು). ಪ್ರಭಾವಳಿಯ ಸ್ತಂಭಿಕೆಗಳಲ್ಲಿ ಆಲೀಢ ಭಂಗಿಯಲ್ಲಿ ಉಷಾ, ಪ್ರತ್ಯುಷಾ ಇದ್ದಾರೆ. ಇನ್ನೂ ಕೆಳಕ್ಕೆ, ಪಾದಪೀಠದ ಮೇಲೆ, ಸೂರ್ಯನ ಬಲಕ್ಕೆ ಕ್ರಮವಾಗಿ ಲೇಖನಿ ಮತ್ತು ಮಾಯಿಯ ಪಾತ್ರೆ ಹಿಡಿದಿರುವ ಪಿಂಗಳ, ಅಶ್ವಮುಖವಾದ ಅಶ್ವಿನೀದೇವತೆ, ಚಾಮರಧಾರಿಣಿಯಾದ ರಾಜ್ಞೀ ಹಾಗೂ ಎಡಕ್ಕೆ ದಂಡ ಹಿಡಿದಿರುವ ದಂಡ, ಅಶ್ವಮುಖದ ಅಶ್ವಿನೀದೇವತೆ, ಚಾಮರಧಾರಿಣಿಯಾದ ನಿಕ್ಷುಭಾ ನಿಂತಿದ್ದಾರೆ. ಈ ವಿವರಗಳು ಭವಿಷ್ಯತ್ ಪುರಾಣದಲ್ಲಿ ಹೇಳಿರುವ ಸೂರ್ಯ ಪ್ರತಿಮಾಲಕ್ಷಣಕ್ಕೆ ಸರಿಹೊಂದುತ್ತವೆ.[2]

ಕರ್ನಾಟಕದಲ್ಲಿ ಈವರೆಗೆ ಗಮನಿಸಲ್ಪಟ್ಟಿರುವ ಸಮಕಾಲಿನ ಶಿಲ್ಪಗಳಲ್ಲಿ ಸೂರ್ಯನ ಇಕ್ಕೆಲಗಳಲ್ಲಿ ಉಷಾ, ಪ್ರತ್ಯುಷಾ, ಇಲ್ಲವೆ ಚಾಮರಧಾರಣಿ ಸ್ತ್ರೀಯರನ್ನು ಸಾಮಾನ್ಯವಾಗಿ ಬಿಡಿಸಿರುತ್ತಾರೆ.[3] ಪ್ರಭಾವಳಿಯ ಮಕರ ತೋರಣದಲ್ಲಿ ಎಂಟು ಗ್ರಹಗಳ ಅಥವಾ

---

*ರೀಡರ್, ಪ್ರಾಚೀನ ಇತಿಹಾಸ ಹಾಗೂ ಶಾಸನದ ಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೫೮೦೦೦೩.

1 ಇಲ್ಲಿರುವ ಶಾಸನದ ಪ್ರಕಾರ ಈ ಹಳ್ಳಿಯ ಮೂಲ ಹೆಸರು ಮಾಗೋಡು. ೫೦ ವಿಪ್ರರಿದ್ದ ಅಗ್ರಹಾರ ಇದಾಗಿತ್ತು ಈ ಶಾಸನದ ಅಧ್ಯಯನವನ್ನೊಳಗೊಂಡ ಬೇರೆ ಲೇಖನ ಅಚ್ಚಿನಲ್ಲಿದೆ.

2 GopinathaRao T.A· Elements of Hindu Iconography Vol·Ipt. II,(Indological Book House, Varanasi, 1971), ಪುಟಗಳು 304-305

3 ನೋಡಿ, ಅದೇ, ಚಿತ್ರ xci, ಹಾವೇರಿಯ ಸೂರ್ಯಪ್ರತಿಮೆ

ಹನ್ನೊಂದು ಆದಿತ್ಯರ ಚಿಕಣಿ ಚಿತ್ರಗಳನ್ನು ತೋರಿಸಿರುವುದುಉಂಟು. ಆದರೆ ಯನಕ್ಕೊಳಗಾಗಿರುವ ದೇವರಶೇಗಿಹಳ್ಳಿಯ ಸೂರ್ಯಪ್ರತಿಯಂತೆ ಅವು ಇಲ್ಲ.[4]

ಶಿಲ್ಪಶೈಲಿಯ ದೃಷ್ಟಿಕೋನದಿಂದ ನೋಡಿದರೆ ಕಲ್ಯಾಣ ಚಾಲುಕ್ಯ ಶಿಲ್ಪಗಳಿಗಿಂತ ಪೂರ್ತಿ ಭಿನ್ನವಾಗಿದೆಯೆಂದು ಹೇಳಲಾಗದಿದ್ದರೂ ಮಕರತೋರಣ, ಪ್ರಭಾವಳಿ ಇತ್ಯಾದಿ ವಿವರಗಳಲ್ಲಿ ಈ ಶಿಲ್ಪ ವಿಶಿಷ್ಟವಾಗಿದೆ. ಸುಮಾರು ಇದೇ ಕಾಲದ್ದೆನ್ನಬಹುದಾದ ಗೋಕರ್ಣದ ಬ್ರಹ್ಮದೇವನ ಶಿಲ್ಪ ಹಾಗೂ ಗೋವಾ ಪ್ರದೇಶದ ಕೆಲ ಶಿಲ್ಪಗಳನ್ನು ಪ್ರಸ್ತುತ ಸೂರ್ಯಪ್ರತಿಮೆ ನೆನಪಿಸುತ್ತದೆ.[5] ಶೈಲಿಯಲ್ಲಿ ಇವೆಲ್ಲ ಮಾಳವ–ಗುಜರಾತ್–ಪಶ್ಚಿಮ ಮಹಾರಾಷ್ಟ್ರ ಪ್ರದೇಶದ ಶಿಲ್ಪಗಳಿಗೆ ತೀರ ಹತ್ತಿರವಾಗಿವೆ[6].

ವಿಗ್ರಹವಿರುವ ಗರ್ಭಗುಡಿಯ ಅರ್ಧಗಂಬದಲ್ಲಿರುವ ಕ್ರಿ. ಶ. ೧೦೯೩ರ ಶಾಸನ ಜೋಯಿಮದೇವನೆಂಬ[7] ಮಂಡಳೇಶ್ವರನನ್ನು ಹೆಸರಿಸುತ್ತದಲ್ಲದೆ ಶಿವ ಮತ್ತು ಕಮಲನಾಭ (ವಿಷ್ಣು) ದೇವರುಗಳಿಗೆ ನೀಡಲ್ಪಟ್ಟ ದಾನವನ್ನು ತಿಳಿಸುತ್ತದೆ. ಶಿಲ್ಪಶೈಲಿಯಾದರೂ ಕ್ರಿ.ಶ. ೧೧ನೇ ಶತಮಾನದ ಉತ್ತರಾರ್ಧಕ್ಕೆ ಸರಿಹೊಂದುತ್ತದೆ.

ಹೀಗೆ ಕ್ರಿ. ಶ. ೧೧ನೇ ಶತಮಾನದ ಉತ್ತರಾರ್ಧದ ಈ ಶಿಲ್ಪ ಕರ್ನಾಟಕದ ಇತರ ಸೂರ್ಯಶಿಲ್ಪಗಳಿಗಿಂತ ವೈಶಿಷ್ಟ್ಯಪೂರ್ಣವಾಗಿದೆ, ಭವಿಷ್ಯತ್ ಪುರಾಣ ಹೇಳಿರುವ ಪ್ರತಿಲಕ್ಷಣಕ್ಕೆ ಹೋಲುತ್ತದೆ, ಶೈಲಿಯ ದೃಷ್ಟಿಯಿಂದಾದರೂ ಗಮನಾರ್ಹವಾಗಿದ್ದು, ಹೊರನಾಡ ಶೈಲಿಯ ಪ್ರಭಾವ ಪ್ರಮಾಣಗಳನ್ನು ನಿರ್ಧರಿಸಲು ಗೋವೆಯ ಕದಂಬರ ಆಡಳಿತಕ್ಕೊಳಪಟ್ಟಿದ್ದ ಪ್ರದೇಶದ ಶಿಲ್ಪಗಳ ಪ್ರತ್ಯೇಕ ವಿಶ್ಲೇಷಣಾತ್ಮಕ ಅಧ್ಯಯದ ಅವಶ್ಯಕತೆಯನ್ನು ಎತ್ತಿ ತೋರಿಸುತ್ತದೆ.

---

4 ಡಾ. ರು. ಮ. ಷಡಕ್ಷರಯ್ಯ ಅವರು ಬೀದರ ಪ್ರದೇಶದ ಅನ್ವೇಷಣೆಯಲ್ಲಿ ಅನೇಕ ಹೊಸ ಮಾದರಿಯ ಪ್ರತಿಮೆಗಳನ್ನು ಬೆಳಕಿಗೆ ತಂದಿದ್ದಾರೆ. ಅವುಗಳಲ್ಲಿ ಒಂದರ ಪ್ರಭಾವಳಿ ಆದಿತ್ಯ, ಗ್ರಹಗಳ ಬದಲಾಗಿ ರಾಶಿ ಚಕ್ರದ ಚಿಕಣಿ ಶಿಲ್ಪ ಹೊಂದಿದೆ. ಕೆಲವು ಮನುಗಳ ಚಿಕಣಿ ಶಿಲ್ಪವನ್ನು ಸೂರ್ಯನ ಪಾದದ ಹತ್ತಿರ ತೋರಿಸಿವೆ. ಶೈಲಿಯ ದೃಷ್ಟಿಯಿಂದ ಇವೆಲ್ಲ ಮಾಳವ ಶಿಲ್ಪಗಳನ್ನು ನೆನಪಿಸುತ್ತವೆ.

5 Naik D. B., "Vishnu Sculpture in Goa Museum" in A. V. Narasimha Murthi B. K. Gururja Rao (ed), Rangavalli : Recent Researches in Indology (Sundeep Delhi, 1983), ಪುಟಗಳು 271-73, ಮತ್ತು ಚಿತ್ರ 81

6 ಅಜಮೀರದ ಸೂರ್ಯ ಶಿಲ್ಪಗಳಿಗೆ ಹೋಲಿಸಿ ನೋಡಿ. Gopinatha Rao T. A. ಅದೇ ಚಿತ್ರ XC

7 ಇವನು ಕಲಚುರಿ ಜೋಗಮನಿರಬೇಕು.